# ಜೀವನದಲ್ಲಿ ಶಾಂತಿ ಸಾಧನೆ


ಲೇಖಕರು :

**ಶ್ರೀ ಎಂ. ಎ. ನಾರಾಯಣ ಐಯ್ಯಂಗಾರ್,** ಎಂ. ಎ., ಬಿ. ಎಲ್.

ನಿವೃತ್ತ ಡೆಪ್ಯುಟಿ ಡೈರೆಕ್ಟರ್, ವಿದ್ಯಾ ಇಲಾಖೆ, ಬೆಂಗಳೂರು




# ಜೀವನದಲ್ಲಿ ಶಾಂತಿ ಸಾಧನೆ

ಜೀವನದಲ್ಲಿ ಶಾಂತಿಯನ್ನು ಗಳಿಸುವ ಸಲುವಾಗಿ ಚಿಕ್ಕಂದಿನಿಂದಲೇ ಪ್ರತಿ ಮಾನವನೂ ಅರಿತು ಆಚರಿಸಲು ಪ್ರಯತ್ನಿಸಬೇಕಾದ ಆಧ್ಯಾತ್ಮಿಕ ನೈತಿಕ ಧ್ಯೇಯಗಳ ಮತ್ತು ಕರ್ಮ, ಜ್ಞಾನ, ಭಕ್ತಿ, ಪ್ರಪತ್ತಿಯೋಗ ಸಾಧನೆಗಳ ಸರಳ ವಿವರಣೆ.


ಲೇಖಕರು :

**ಶ್ರೀ ಎಂ. ಎ. ನಾರಾಯಣ ಐಯ್ಯಂಗಾರ್,** ಎಂ.ಎ., ಬಿ ಎಲ್.

ನಿವೃತ್ತ ಡೆಪ್ಯುಟಿ ಡೈರೆಕ್ಟರ್, ವಿದ್ಯಾ ಇಲಾಖೆ, ಬೆಂಗಳೂರು.



ಪ್ರಕಾಶಕರು :

**ಶ್ರೀ ಎಂ. ಎ. ಶ್ರೀನಿವಾಸ ಐಯ್ಯಂಗಾರ್,** ಎಂ.ಎ., ಬಿ.ಎಸ್.ಸಿ., ಬಿ.ಎಲ್., ಬಿ.ಟಿ.

ಮುಖ್ಯೋಪಾಧ್ಯಾಯರು, ಆಚಾರ್ಯ ವಿವಿಧೋದ್ದೇಶ ಪ್ರೌಢಶಾಲೆ, ಗೌರೀಬಿದನೂರು

ಮೈಸೂರು ವೈಶ್ಯ ಪತ್ರಿಕೆಯಲ್ಲಿ 1969 ನೇ ಇಸವಿಯಿಂದ 1970ನೇ ಇಸವಿವರೆಗೆ ಪ್ರಕಟಿಸಲ್ಪಟ್ಟಿದೆ

*( Compiled in February 1970 )*



ದಿ। ಶ್ರೀ ಎಂ.ಎ ನಾರಾಯಣ ಐಯ್ಯಂಗಾರ್‌ರವರು

ದಿವಂಗತ ಶ್ರೀ ಎಂ. ಎ. ನಾರಾಯಣ ಐಯ್ಯಂಗಾರ್‌ರವರು
(ಅಧ್ಯಕ್ಷರು ಶ್ರೀ ನವಭಾರತ ಆಶ್ರಮ)

# ಅವರ ಜೀವನ ಪರಿಚಯ


ಲೇಖಕರು :—ಶ್ರೀ ಎಂ. ಎ. ಶ್ರೀನಿವಾಸ ಐಯ್ಯಂಗರ್,
ಎಂ ಎ., ಜಿ.ಎಸ್‌ಸಿ., ಬಿ.ಎಲ್., ಬಿ.ಟಿ. ರವರು

ಮುಖ್ಯೋಪಾಧ್ಯಾಯ, ಆಚಾರ್ಯ ವಿವಿಧೋದ್ದೇಶ
ಪ್ರೌಢಶಾಲೆ, ಗೌರಿಬಿದನೂರು.


ದಿವಂಗತರಾದ ಪೂಜ್ಯ ಎಂ. ಎ. ನಾರಾಯಣ ಐಯ್ಯಂಗಾರ್ಯರು ಪ್ರಾಪಂಚಿಕ ಗೃಹಸ್ಥಾಶ್ರಮ ಜೀವನದಲ್ಲಿ ಪರಮ ಶಾಂತಿಯನ್ನು ಸಾಧಿಸಲು ಸತತವಾಗಿ ಶ್ರಮಿಸಿದ ದಿವ್ಯ ಜೀವಗಳಲ್ಲಿ ಒಬ್ಬರು. ಬಾಲ್ಯದಲ್ಲಿಯೇ ಉನ್ನತ ಆಧ್ಯಾತ್ಮಧ್ಯೇಯಗಳನ್ನು ರೂಪಿಸಿಕೊಂಡು ಜೀವನದ ಕೊನೆಯ ಘಳಿಗೆಯವರೆಗೂ ಆ ಧ್ಯೇಯಗಳನ್ನು ತಮ್ಮ ಪವಿತ್ರ ಜೀವನದಲ್ಲಿ ಅಳವಡಿಸಿಕೊಳ್ಳಲು ಪ್ರಯತ್ನಿಸಿದ ಕರ್ಮಯೋಗಿ. ಈ ಮಹಾಸಾಧನೆಯಲ್ಲಿ ಅವರು ಪೂರ್ತಿಯಾಗಿ ಯಶಸ್ಸನ್ನು ಗಳಿಸದಿದ್ದರೂ ಬಹುಮಟ್ಟಿಗೆ ಆದರ್ಶಯುತ ಜೀವನವನ್ನು ನಡೆಸಿ ಅವರ ಬಾಳಿನಲ್ಲಿ ಅತ್ಯಂತ ಸಮೀಪ ಬಂಧುಗಳಾಗಿರುವ ಸೌಭಾಗ್ಯವನ್ನು ಪಡೆದ ನಮ್ಮೆಲ್ಲರಿಗೂ ಬಹಳ ಹೆಚ್ಚಿನ ಮಾರ್ಗದರ್ಶನ ನೀಡಿದರೆಂದರೆ ಅತಿಶಯೋಕ್ತಿಯಲ್ಲ. ಈ ಜೀವನವು ಸತತವಾಗಿ ಆಧ್ಯಾತ್ಮಧ್ಯೇಯ ಸಾಧನೆಗಾಗಿ ದುಡಿಯಬೇಕಾದ ಕರ್ಮಶಾಲೆ. ಪ್ರತಿ ಘಳಿಗೆಯಲ್ಲಿಯೂ ನಾವು ಜಾಗೃತರಾಗಿ, ವಿಮರ್ಶಾತ್ಮಕ ಬುದ್ಧಿಯಿಂದ ನಮ್ಮ ಕಾಲವನ್ನು ಉತ್ತಮವಾಗಿ ವಿನಿಯೋಗಿಸಬೇಕು. ಸೋಲು ಗೆಲವುಗಳು ಈ ಪ್ರಯತ್ನದಲ್ಲಿ ಸ್ವಾಭಾವಿಕ. ಅದಕ್ಕಾಗಿ ನಾವು ಕುಗ್ಗುವುದಾಗಲೀ ಹಿಗ್ಗುವುದಾಗಲಿ ಅನವಶ್ಯಕ. ಭಗವಂತನ ಕೃಪೆಯನ್ನು ಸದಾಕಾಲದಲ್ಲಿ ಅಪೇಕ್ಷಿಸುತ್ತಾ ನಾವು ಮಾಡಬೇಕಾದ ಪ್ರಯತ್ನವನ್ನು ನಿಷ್ಕಾಮ ಮನೋಧರ್ಮದಿಂದ ಮಾಡುವುದೇ ನಮ್ಮ ಜೀವನದ ಗುರಿ. ಇದೇ ಇವರ ತುಂಬು ಜೀವನದಿಂದ ನಾವು ಕಲಿಯಬೇಕಾದ ಪಾಠ.

**ಬಾಲ್ಯ ಮತ್ತು ವಿದ್ಯಾಭ್ಯಾಸ:**—1887 ರಲ್ಲಿ ಶ್ರೀ ನಾರಾಯಣ ಐಯ್ಯಂಗಾರ್ಯರು ಮೈಸೂರಿನಲ್ಲಿ ಉತ್ತಮ ಸುಸಂಸ್ಕೃತ ವಂಶದಲ್ಲಿ ಜನಿಸಿದರು. ಇವರ ತಂದೆ ಶ್ರೀ ಎಂ.ಎ. ಶ್ರೀನಿವಾಸ ಐಯ್ಯಂಗಾರ್ಯರು ಮೆಥಾಡಿಸ್ಟ್ ಮಿಷನ್ ಪ್ರೌಢಶಾಲೆಯ ಮುಖ್ಯ ಉಪಾಧ್ಯಾಯರೂ ಮತ್ತು ಪ್ರಖ್ಯಾತ ವಕೀಲರೂ ಆಗಿದ್ದರು. ಈ ಎರಡು ವೃತ್ತಿಗಳನ್ನೂ ಒಟ್ಟಿಗೆ ನಡೆಸಲು ಅವರಿಗೆ ಆ ಕಾಲದಲ್ಲಿ ಅವಕಾಶವಿದ್ದಿತು. ಇವರ ತಾಯಿ ಶ್ರೀ ಶಿಂಗಮ್ಮ ಅತ್ಯಂತ ದೈವಭಕ್ತಿಯಿಂದ ಕೂಡಿದ ಸದ್ಗೃಹಿಣಿ. ಆಕೆಯು ಕೊನೆಯ ದಿನಗಳಲ್ಲಿಯೂ ಅವರು ಅನೇಕ ಭಕ್ತಿಗೀತಗಳನ್ನೂ ಶ್ಲೋಕಗಳನ್ನೂ ಅಭ್ಯಾಸ ಬಲದಿಂದ ಸದಾ ಹಾಡುತ್ತಿದ್ದರು. ತಮ್ಮ ಕುಟುಂಬ ವರ್ಗದವರಿಗೆ ಸ್ವಾರ್ಥರಹಿತ ಸೇವೆಯನ್ನು ಮಾಡಿ ಎಲ್ಲರ ಗೌರವ ವಿಶ್ವಾಸಗಳಿಗೆ ಪಾತ್ರರಾಗಿದ್ದರು. ಶ್ರೀ ನಾರಾಯಣ ಐಯ್ಯಂಗಾರ್ಯರ ಪ್ರಾಥಮಿಕ, ಮಾಧ್ಯಮಿಕ ಮತ್ತು ಪ್ರೌಢ ಶಿಕ್ಷಣ ಮೈಸೂರಿನಲ್ಲೇ ನಡೆಯಿತು. ಇವರ ತಂದೆಯವರು ತೀರಿಕೊಂಡ ನಂತರ ಶ್ರೀ ನಾರಾಯಣ ಐಯ್ಯಂಗಾರ್ಯರು ಮದರಾಸಿಗೆ ತೆರಳಿ ಅವರ ದೊಡ್ಡಮ್ಮನವರ ಮನೆಯಲ್ಲಿದ್ದುಕೊಂಡು ಕಾಲೇಜು ವಿದ್ಯಾಭ್ಯಾಸ ನಡೆಸಬೇಕಾದ ಅವಶ್ಯಕತೆಯು ಉಂಟಾಯಿತು. ಅಲ್ಲಿಯ ವಾತಾವರಣ ಇವರ ಮೇಲೆ ಉತ್ತಮ ಪ್ರಭಾವ ಬೀರಿತು. ಆ ಕಾಲದಲ್ಲಿ ದೇಶದ ಸ್ವಾತಂತ್ರ್ಯ ಸಾಧನೆಗಾಗಿ ತಮ್ಮದೇ ರೀತಿಯಲ್ಲಿ ಪ್ರಯತ್ನಿಸಿದ ಅನೇಕ ದೇಶಭಕ್ತರ ಪರಿಚಯ ಇವರಿಗೆ ಉಂಟಾಯಿತು. ಅದು ಗಾಂಧೀಜಿಯವರ ಅಸಹಕಾರ ಚಳುವಳಿ ಪ್ರಾರಂಭವಾಗುವುದಕ್ಕೆ ಮೊದಲಿನ ಕಾಲ. ಮಹಾಕವಿ ಶ್ರೀ ಸುಬ್ರಹ್ಮಣ್ಯ ಭಾರತಿ, ಶ್ರೀ ಎಸ್. ಶ್ರೀನಿವಾಸಚಾರ್, ವಿ ವಿ ಎಸ್. ಐಯ್ಯರ್ ಮುಂತಾದ ದೇಶಭಕ್ತರು ಕ್ರಾಂತಿಕಾರಕ





ಸ್ವಾತಂತ್ರ್ಯ ಚಳುವಳಿ ನಡೆಸಿದ ಕಾಲ. ಅಂದಿನ ದೇಶಭಕ್ತರಾದ ಯುವಕರ ಸಂಪರ್ಕದಿಂದ ಇವರಿಗೂ ಕೂಡ ಪುದುಚೆರಿಯ ಶ್ರೀ ಅರವಿಂದಾಶ್ರಮದ ವಾತಾವರಣದಲ್ಲಿ ಸ್ಫೂರ್ತಿ ಪಡೆಯುವ ಅವಕಾಶ ದೊರೆಯಿತು. ಈ ಮಧ್ಯೆ ಇವರಿಗೆ ಶ್ರೀ ಸ್ವಾಮಿ ವಿವೇಕಾನಂದರ ಪರಿಚಯವೂ ಉಂಟಾಯಿತು. ಇವರ ಹೆಂಡತಿ ಶಿಂಗಮ್ಮನವರ ದೊಡ್ಡಪ್ಪನವರಾದ ಶ್ರೀ ಅಳಸಿಂಗ ಪೆರಿಮಾಳ್, ಶ್ರೀ ಸ್ವಾಮಿ ವಿವೇಕಾನಂದರ ಪರಮ ಸ್ನೇಹಿತರು. ಅವರ ಮೂಲಕ ಇವರಿಗೆ ಸ್ವಾಮಿಜೀಯವರ ಸ್ಫೂರ್ತಿದಾಯಕ ಸಂದರ್ಶನ ಭಾಷಣಗಳ ಮತ್ತು ಬರವಣಿಗೆಗಳ ಮಾರ್ಗದರ್ಶನ ದೊರೆಯಿತು. ಈ ಅನುಭವಗಳ ಪರಿಣಾಮವಾಗಿ ಶ್ರೀ ನಾರಾಯಣ ಐಯ್ಯಂಗಾರ್‌ರವರಿಗೆ ಭಾರತೀಯ ಆಧ್ಯಾತ್ಮ ಸಂಸ್ಕೃತಿಯಲ್ಲಿ ಅಪಾರ ಗೌರವ ಭಕ್ತಿ ವಿಶ್ವಾಸಗಳೂ, ಜೀವನದಲ್ಲಿ ಆಧ್ಯಾತ್ಮ ಆದರ್ಶಗಳ ಆಚರಣೆಯ ವಿಷಯದಲ್ಲಿ ಅತ್ಯಂತ ತೀವ್ರವಾದ ಆಸಕ್ತಿಯೂ ಉಂಟಾದವು. ತಾವು ಪುದುಚೇರಿಯಲ್ಲಿದ್ದಾಗ ಮಹಾಯೋಗಿ ಅರವಿಂದರ ಸಾನಿಧ್ಯದಲ್ಲಿ ನೇರವಾಗಿ ಕಲಿತ ಧ್ಯಾನ ಮಾರ್ಗಗಳನ್ನು ಅವರು ಆಗಾಗ್ಗೆ ನಮ್ಮೆಲ್ಲರಿಗೂ ವಿವರಿಸುತ್ತಿದ್ದರು. ಶ್ರೀ ಸ್ವಾಮಿ ವಿವೇಕಾನಂದರ ಬರವಣಿಗೆಗಳನ್ನೂ ಭಾಷಣಗಳನ್ನೂ ಆಸಕ್ತಿಯಿಂದ ಓದಿ ಅವುಗಳಿಂದ ಅತ್ಯಂತ ಸ್ಫೂರ್ತಿಯನ್ನು ಪಡೆದುದಾಗಿ ಸ್ಮರಿಸುತ್ತಿದ್ದರು. ಅವರ ಮುಂದಿನ ಆಧ್ಯಾತ್ಮ ಜೀವನ ಪ್ರಯತ್ನ ಮತ್ತು ಪ್ರಯೋಗಗಳಿಗೆಲ್ಲಾ ಈ ಕಾಲದ ಅನುಭವ ನಾಂದಿಯಾಯಿತು. ಮದರಾಸಿನಲ್ಲಿ ಎಂ. ಎ, ಮತ್ತು ಬಿ.ಎಲ್., ಪರೀಕ್ಷೆಗಳನ್ನು ಮುಗಿಸುವ ವೇಳೆಗೆ ಇವರ ಮನಸ್ಸು ಆಧ್ಯಾತ್ಮ ತತ್ವಚಿಂತನೆ ಮತ್ತು ಸಾಧನ ಮಾರ್ಗಗಳ ಕಡೆಗೆ ಪೂರ್ಣವಾಗಿ ತಿರುಗಿತು.

**ಗೃಹಸ್ಥಜೀವನ ಮತ್ತು ಉದ್ಯೋಗ**—ಮದರಾಸಿನಲ್ಲಿ ವಿದ್ಯಾಭ್ಯಾಸ ಮುಗಿಸಿಕೊಂಡು ಮೈಸೂರು ಸಂಸ್ಥಾನಕ್ಕೆ ಹಿಂತಿರುಗಿದ ಶ್ರೀಮಾನ್ ನಾರಾಯಣ ಐಯ್ಯಂಗಾರ್ಯರಿಗೆ ಮಹಾರಾಜ ಕಾಲೇಜಿನಲ್ಲಿ ಚರಿತ್ರೆಯ ಉಪನ್ಯಾಸಕರ ಕೆಲಸ ದೊರೆಯಿತು. 1914 ರಿಂದ 1921 ರವರೆಗೆ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಅಧ್ಯಾಪಕರಾಗಿ ಸೇವೆಸಲ್ಲಿಸಿದ ಕಾಲದಲ್ಲಿ ಡಾ॥ ಸಿ. ಆರ್. ರೆಡ್ಡಿ, ಸರ್. ಎಸ್. ರಾಧಾಕೃಷ್ಣನ್ ಮುಂತಾದ ಶಿಕ್ಷಣತಜ್ಞರ ಮತ್ತು ತತ್ವಜ್ಞಾನಿಗಳ ಹತ್ತಿರದ ಸಂಪರ್ಕ ಉಂಟಾಯಿತು. ಅವರೊಡನೆ ಅನೇಕ ಸಂದರ್ಭಗಳಲ್ಲಿ ವಿಚಾರ ವಿನಿಮಯಮಾಡಿಕೊಳ್ಳುತ್ತಿದರು. ಇದ್ದರಿಂದ ಇವರಲ್ಲಿ ತತ್ವಶಾಸ್ತ್ರದ ಆಳವಾದ ಅಧ್ಯಯನದೊಡನೆ ವಿಮರ್ಶಾತ್ಮಕ ಮನೋಧರ್ಮ ಬೆಳೆಯಿತು. 1922 ರಿಂದ 1939 ರ ವರೆಗೆ ಇವರ ಸೇವೆ ವಿಶ್ವವಿದ್ಯಾನಿಲಯದಿಂದ ವಿದ್ಯಾ ಇಲಾಖೆಗೆ ದೊರೆಯಿತು. ಪೌಡಶಾಲೆಯ ಉಪಾಧ್ಯಾಯರಾಗಿ ಪ್ರಾರಂಭಿಸಿ ಚಿಕ್ಕಮಗಳೂರು, ಚನ್ನಪಟ್ಟಣ ಮತ್ತು ಮೈಸೂರು ಮತ್ತು ಬೆಂಗಳೂರಿನ ಪ್ರಮುಖ ಪೌಡಶಾಲೆಗಳ ಮುಖ್ಯೋಪಾಧ್ಯಾಯರಾಗಿ ವಿಶೇಷ ಸೇವೆ ಸಲ್ಲಿಸುವ ಸದವಕಾಶ ದೊರೆಯಿತು. ಅವರ ಶಿಷ್ಯಕೋಟಿಗೆ ಸೇರಿದ ಅನೇಕ ಪ್ರತಿಭಾನ್ವಿತ ಮಹನೀಯರು ಇಂದಿಗೂ ಅವರ ಆಳವಾದ ಪಾಂಡಿತ್ಯ ಮತ್ತು ಅಪಾರವಾದ ವಿದ್ಯಾರ್ಥಿ ಪ್ರೇಮ ಇವುಗಳನ್ನು ಸ್ಮರಿಸುತ್ತಿದ್ದಾರೆ. ಹಿರಿಯ ಆದರ್ಶಗಳ ವಿಷಯದಲ್ಲಿ ತಮ್ಮ ವಿದ್ಯಾರ್ಥಿಗಳಿಗೆ ಅನೇಕರೀತಿಯಲ್ಲಿ ವಿಶೇಷ ತರಗತಿಗಳ ಮತ್ತು ಪಾಠೇತರ ಚಟುವಟಿಕೆಗಳ ಮೂಲಕ ಸ್ಫೂರ್ತಿನೀಡಿದರು. ಸ್ವಾಮಿ ವಿವೇಕಾನಂದರ ಸಂದೇಶವನ್ನು ಸರಳ ರೀತಿಯಲ್ಲಿ ವಿದ್ಯಾರ್ಥಿಗಳಲ್ಲಿ ಪ್ರಚಾರಮಾಡುತ್ತಿದ್ದರು. ಆಧ್ಯಾತ್ಮ ಮತ್ತು ನೈತಿಕ ಶಿಕ್ಷಣದಲ್ಲಿ ಅನೇಕ ಶೈಕ್ಷಣಿಕ ಪ್ರಯೋಗಗಳನ್ನು ಮಾಡಿದರು. 1939 ರಿಂದ 1945 ವರೆಗೆ ಶ್ರೀ ನಾರಾಯಣ ಐಯ್ಯಂಗಾರ್ಯರು ಕೋಲಾರ ಜಿಲ್ಲಾ ವಿದ್ಯಾಧಿಕಾರಿಗಳಾಗಿಯೂ ಬೆಂಗಳೂರು ಮೈಸೂರು ವಿಭಾಗಗಳ ಡೆಪ್ಯುಟಿ ಡೈರೆಕ್ಟರವರಾಗಿಯೂ ವಿಶೇಷ ಸೇವೆ ಸಲ್ಲಿಸಿದರು. ಈ ಕಾಲದಲ್ಲಿ ಸಹಸ್ರಾರು ಅಧ್ಯಾಪಕರಲ್ಲಿ ಶಿಕ್ಷಣವೃತ್ತಿಯ ಬಗ್ಗೆ ಗೌರವವನ್ನು ಬೆಳಸಿ ಅವರು ಉತ್ತಮ ಸೇವೆ ಸಲ್ಲಿಸಲು ಸಹಾನುಭೂತಿಯುತವಾದ ಮಾರ್ಗದರ್ಶನ ನೀಡಿದರು. ಶಾಲಾ ತರಗತಿಗಳಲ್ಲಿ ಉತ್ತಮ ಪಾಠಪ್ರವಚನ ನಡೆಯಲು ಅನೇಕ ಸುಧಾರಣೆಗಳನ್ನು ಜಾರಿಗೆ ತಂದರು. ಅಧ್ಯಾಪಕರ ಪಾಠಕ್ರಮದ ವಾರ್ಷಿಕ ಯೋಜನೆ, ವಿದ್ಯಾರ್ಥಿಗಳ ಮನೆ ಕೆಲಸದ ಪುಸ್ತಕಗಳು ಮತ್ತು ಪಾಠೇತರ ಚಟುವಟಿಕೆಗಳ ಯೋಜನಾಕ್ರಮ ಇವುಗಳು ಬಗ್ಗೆ ಅನೇಕ ಹೊಸ ಪ್ರಯೋಗ ನಡೆಸಿದರು. ಅಂದಿನ ವಿದ್ಯಾಇಲಾಖೆಯ ಮುಖ್ಯ ಅಧಿಕಾರಿಗಳಾಗಿದ್ದ ಶ್ರೀ ಎ. ಆರ್. ವಾಡಿಯಾ ಮತ್ತು ಶ್ರೀ ಸುಲ್ತಾನ್ ಮೊಹಿಯುದ್ದೀನ್ ಮುಂತಾದವರು ಇವರ ಕಾರ್ಯನಿಷ್ಠೆ ಮತ್ತು ದಕ್ಷತೆಯ ಬಗ್ಗೆ ಅಪಾರ ಗೌರವವನ್ನು ಸೂಚಿಸುತ್ತಿದ್ದರು. ಇಂದಿಗೂ ಶಿಕ್ಷಣ ಇಲಾಖೆಯ ಅನೇಕ ಹಿರಿಯ ಅಧಿಕಾರಿಗಳು ಶ್ರೀ ಎಂ. ಎ. ನಾರಾಯಣ ಐಯ್ಯಂಗಾರ್ಯರನ್ನು ಅತ್ಯಂತ ಪ್ರೀತಿ, ವಿಶ್ವಾಸ ಮತ್ತು ಗೌರವಗಳೊಡನೆ ನೆನೆಯುತ್ತಾರೆ.

**ಆಧ್ಯಾತ್ಮ ಪ್ರಚಾರ ಕಾರ್ಯ**—1946 ರಲ್ಲಿ ಶಿಕ್ಷಣ ಇಲಾಖೆಯ ತುಂಬು ಜೀವನದಿಂದ ನಿವೃತ್ತರಾದ ಶ್ರೀ ನಾರಾಯಣ ಐಯ್ಯಂಗಾರ್ ಅವರಿಗೆ ವಿಶ್ರಾಂತಿಜೀವನ ಇನ್ನೂ ಹೆಚ್ಚಿನ ಆಧ್ಯಾತ್ಮ ಸಾಧನೆ ಮತ್ತು ಸೇವೆಗೆ ಪ್ರಚೋದನೆಯಾಯಿತು. ಜಗತ್ತಿನ ಎಲ್ಲಾ ಧರ್ಮಗಳ ಪವಿತ್ರಗ್ರಂಥಗಳ ಮೂಲಪಾಠಗಳ ಪ್ರವಚನ, ಅವುಗಳ ಬಗ್ಗೆ ಬರೆದ ವಿವಿಧ ವ್ಯಾಖ್ಯಾನಗಳ ಅಧ್ಯಯನ, ಮತ್ತು ಚಿಂತನೆ ಇವರ ಮುಖ್ಯ ದೈನಂದಿನ ಕಾರ್ಯಕ್ರಮವಾಯಿತು. ಧರ್ಮಗ್ರಂಥಗಳನು ಆಯಾಮತಗಳ ವೈದೀಕ ವಿದ್ವಾಂಸರುಗಳ ನೆರವಿನಿಂದ ಓದಿ ಆಳವಾಗಿ ಅಭ್ಯಾಸ ಮಾಡಿದರು. ಈ ರೀತಿಯ ಸಾಂಪ್ರದಾಯಿಕ ಅಧ್ಯಯನದ ಜೊತೆಗೆ ಆಧುನಿಕ ತತ್ವಜ್ಞಾನಿಗಳ ತರ್ಕಬದ್ಧವಾದ ಟೀಕೆ ಟಿಪ್ಪಣಿಗಳನ್ನು ಓದಿ ವಿಮರ್ಶಾತ್ಮಕ ದೃಷ್ಟಿಯಿಂದ ತೊಲನೆಮಾಡಿ ತಮ್ಮದೇ ಆದ ನಿರ್ಧಿಷ್ಟ ಅಭಿಪ್ರಾಯಗಳನ್ನು ಅನುಭವ ಜನಿತವಾದ ರೀತಿಯಲ್ಲಿ ಬೆಳಸಿಕೊಂಡರು. ಕನ್ನಡ ನಾಡಿನ ಹಿರಿಯ ವ್ಯಕ್ತಿಗಳಾದ ಮಾನ್ಯ ಶ್ರೀ ಡಿ. ವಿ. ಗುಂಡಪ್ಪನವರು ತಮ್ಮ ಪತ್ರಬಂದರಲ್ಲಿ ತಿಳಿಸಿರುವಂತೆ " He was a scholar, deeply learned in differant branches of literature which he had made his own. And his interests were large and humane. More than all was his goodness. I have not known a man more earnest about living a good life and devoting himself to the high & pure in human life." ಈರೀತಿ ಅತ್ಯಂತ ಕಷ್ಟದಿಂದಲೂ ಸತತ ಪ್ರಯತ್ನದಿಂದಲೂ ತಾವುಗಳಿಸಿಕೊಂಡ ಆಧ್ಯಾತ್ಮಜ್ಞಾನವನ್ನು ಕರ್ಮಯೋಗದ ದೃಷ್ಟಿಯಿಂದ ವಿದ್ಯಾರ್ಥಿಗಳಿಗೂ, ಜನ ಸಾಮಾನ್ಯರಿಗೂ ಪ್ರಚಾರ ಮಾಡಬೇಕೆಂಬ ಹಂಬಲ ಇವರಿಗೆ ತಮ್ಮ ನಿವೃತ್ತಿ ಜೀವನದಲ್ಲಿ ಉಂಟಾಯಿತು. 1951 ರಲ್ಲಿ ಗೌರೀಬಿದನೂರಿನ ಗಂಗಸಂದ್ರ ಗ್ರಾಮದ ಕಸ್ತೂರಿಬಾ ಕೇಂದ್ರದ ಸಂಚಾಲಕಿ ಶ್ರೀಮತಿ ಗೌರಮ್ಮನವರು ಆಧ್ಯಾತ್ಮಜ್ಞಾನ ಪ್ರಚಾರಕ್ಕಾಗಿ ದಾನವಾಗಿ ಇವರಿಗೆ ಕೊಟ್ಟ ರಮ್ಯವಾದ ತೋಪಿನಲ್ಲ " ಶ್ರೀ ನವಭಾರತ ಆಶ್ರಮ " ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಇದರ ಆಶ್ರಯದಲ್ಲಿ ಅನೇಕ ಕನ್ನಡ ಮತ್ತು ಇಂಗ್ಲೀಷಿನ ಲೇಖನಗಳನ್ನು ಆಧ್ಯಾತ್ಮ ಮತ್ತು ನೈತಿಕ ಶಿಕ್ಷಣಕ್ಕಾಗಿ ಪ್ರಕಟಿಸಿದರು. " ಕನ್ನಡಿಗರ ಜ್ಞಾನ ದೀಪಿಕಾ" ಎಂಬ ಪ್ರಕಟನ ಮಾಲೆಯ ಮೂಲಕ ಸಂಸ್ಥಾನದ ನಾನಾ ಶಿಕ್ಷಣ ಸಂಸ್ಥೆಗಳಿಗೆ ಆಧ್ಯಾತ್ಮ ಸಂದೇಶವನ್ನು ಸಾರಿದರು. ತಾಯಿನಾಡು ಪತ್ರಿಕೆಯಲ್ಲಿ " ನಾಸ್ತಿಕವಾದಿಗಳಿಗೆ ವೇದಾಂತಿಯ ಪ್ರತಿವಾದ " ಎಂಬ ಶಿರೋನಾಮೆಯಲ್ಲಿ ವಿಚಾರ ಪೂರಿತ ಲೇಖನ ಮಾಲೆಯನ್ನು ಪ್ರಕಟಿಸಿದರು. "ಮೈಸೂರು ವೈಶ್ಯ ಪತ್ರಿಕೆ" ಯ ಮೂಲಕ ಕನ್ನಡದಲ್ಲಿಯೂ, ಮದರಾಸಿನ"Educational Review" ಮೂಲಕ ಇಂಗ್ಲೀಷಿನಲ್ಲಿಯೂ ಭಗವದ್ಗೀತೆಯ ಏಳನೇ ಅಧ್ಯಾಯದಿಂದ ಹದಿಮೂರನೆ ಅಧ್ಯಾಯದವರೆಗಿನ ದಿವ್ಯಸಂದೇಶಗಳನ್ನೂ, ಉಪನಿಷತ್ತುಗಳ ಮುಖ್ಯ ಸಾರಾಂಶಗಳನ್ನೂ ಸರ್ವಮತಸ್ಥರಲ್ಲಿಯೂ ಸಮನ್ವಯದೃಷ್ಟಿ ಬೆಳೆಯುವ ರೀತಿಯಲ್ಲಿ ವಿವಿಧ ಲೇಖನಗಳ ಮೂಲಕ ಬರೆದು ಪ್ರಕಟಿಸಿದರು. ವಿಶ್ವದ ಎಲ್ಲಾ ಮತಧರ್ಮಗಳ ದಿವ್ಯಗ್ರಂಥಗಳ ಸಂದೇಶವನ್ನೂ ಸರ್ವಧರ್ಮ ಸಮನ್ವಯ ದೃಷ್ಟಿಯಿಂದ ಪ್ರತಿಪಾದಿಸಿದರು. ತಿರುವಾಯ್ಮೊಳಿ ದಿವ್ಯಪ್ರಬಂಧ ಮುಂತಾದ ತಮಿಳು ಪವಿತ್ರ ಗ್ರಂಥಗಳ ಸಾರವನ್ನೂ ತಮ್ಮ ಲೇಖನಗಳ ಮೂಲಕ ಪ್ರಚಾರಮಾಡಿದರು. ಹೀಗೆ ಸುಲಭವಾದ ಕನ್ನಡ ಮತ್ತು ಇಂಗ್ಲೀಷಿನಲ್ಲಿ ವಿದ್ಯಾರ್ಥಿಗಳಿಗೂ ಜನ ಸಾಮಾನ್ಯರಿಗೂ ಅರ್ಥವಾಗುವಂತೆ ತಾವು ಗಳಿಸಿದ ಆಧ್ಯಾತ್ಮಜ್ಞಾನದ ಸಾರವನ್ನು ತಮ್ಮ ವಿವಿಧ ಲೇಖನಗಳಲ್ಲಿ ಪ್ರಚಾರಮಾಡಿ ಜ್ಞಾನದಾನ ಮಾಡಿದ್ದಾರೆ.

ಗೌರೀಬಿದನೂರು ನವಭಾರತ ಆಶ್ರಮ, ಶಿಕ್ಷಣ ಕ್ಷೇತ್ರದಲ್ಲಿ ಮತ್ತೊಂದು ಕ್ರಾಂತಿಕಾರಕ ಪ್ರಯೋಗಕ್ಕೆ ಸಾಧನವಾಯಿತು. ಗೌರಿಬಿದನೂರು ಆಚಾರ್ಯ ವಿವಿಧೋದ್ದೇಶ ಪ್ರೌಢಶಾಲೆಯ ವಿದ್ಯಾರ್ಥಿಗಳಿಗೆ ಅಲ್ಲಿನ ಆಶಾವಾದಿಗಳಾದ ಅಧ್ಯಾಪವರ್ಗದವರ ನೆರವಿನಿಂದ ಆಧ್ಯಾತ್ಮ ಮತ್ತು ನೈತಿಕ ಶಿಕ್ಷಣ ನೀಡಲು ಶ್ರೀ ನಾರಾಯಣಯ್ಯಂಗಾರ್ಯರಿಗೆ ಮಾರ್ಗದರ್ಶನ ಲಾಭ ದೊರೆಯಿತು. ಪ್ರತಿ ಶುಕ್ರವಾರವೂ ಬೆಳಗ್ಗೆ ಬ್ರಹ್ಮಮುಹೂರ್ತ ಸಮಯದಲ್ಲಿ ಆಶ್ರಮದ ತೋಪಿನಲ್ಲಿ ಆಸಕ್ತಿಯುಳ್ಳ ವಿದ್ಯಾರ್ಥಿಗಳೂ ಅಧ್ಯಾಪಕರೂ ಹೆಚ್ಚಿನ ಸಂಖ್ಯೆಯಲ್ಲಿ ಸೇರಿ ದಿವ್ಯಜೀವನದ ಪ್ರಯೋಗಗಳನ್ನು ನಡೆಸಲು ಸಹಕಾರಿಯಾಯಿತು. ಶ್ರಮದಾನ, ಸರಳವ್ಯಾಯಾಮ, ಸೂರ್ಯ ನಮಸ್ಕಾರ, ಯೋಗಾಸನಗಳ ಅಭ್ಯಾಸ, ವಯ್ಯಕ್ತಿಕ ಧ್ಯಾನ, ಸಾಮೂಹಿಕ ಧ್ಯಾನ, ವಿಶ್ವದ ಎಲ್ಲಾ ಧರ್ಮಗಳ ಮಹಾತ್ಮರ ದಿವ್ಯಜೀವನದ ಸಂದೇಶಗಳ ಪ್ರವಚನ ಮತ್ತು ವಿಮರ್ಶೆ ಮುಂತಾದ ಅನೇಕ ವಿಭಾಗಗಳನ್ನು ಒಳಗೊಂಡ ಒಂದು " ಅಂತರ್ಯೋಗ " ಸಾಧನಾಕಾರ್ಯಕ್ರಮ ಇವರ ನೇತೃತ್ವದಲ್ಲಿ ಪ್ರಾರಂಭವಾಗಿ ಕೆಲವು ವರ್ಷಗಳ ಕಾಲ ಸತತವಾಗಿ ನಡೆಯಿತು. ಈ ಸಾರ್ವತ್ರಿಕ ಆಧ್ಯಾತ್ಮ ಮತ್ತು ನೈತಿಕ ಶಿಕ್ಷಣ ಪ್ರಯೋಗವು



ಶಿಕ್ಷಣತಜ್ಞರ ಗಮನವನ್ನೂ ಸೆಳೆದು ಅಖಿಲ ಭಾರತ ಶಿಕ್ಷಣ ಕ್ಷೇತ್ರದಲ್ಲಿಯೂ ವಿಶೇಷ ಮಾನ್ಯತೆಯನ್ನು ಪಡೆಯಿತು. ಶ್ರೀ ನಾರಾಯಣ ಐಯ್ಯಂಗಾರ್ಯರು ಈ ಪ್ರಯೋಗಕ್ಕೆತಮ್ಮ ಸ್ಫೂರ್ತಿಯುತ ಮಾರ್ಗದರ್ಶನ ನೀಡಿ ಶಿಕ್ಷಣ ಕ್ಷೇತ್ರದ ಆಧ್ಯಾತ್ಮ ಮತ್ತು ನೈತಿಕ ಶಿಕ್ಷಣ ವಿಭಾಗದಲ್ಲಿ ಕ್ರಾಂತಿಕಾರಕ ಸೇವೆಸಲ್ಲಿಸಿದ್ದಾರೆ. ಆಧ್ಯಾತ್ಮ ಜೀವನದ ಪ್ರತಿಬಿಂಬವಾದ ಪವಿತ್ರ ಭಾರತ ದೇಶದ ಪ್ರತಿ ಶಿಕ್ಷಣಶಾಲೆಯೂ ಶ್ರೀ ನವಭಾರತ ಆಶ್ರಮದ ಕೇಂದ್ರಗಳನ್ನು ಸ್ಥಾಪಿಸಿ ವಿದ್ಯಾರ್ಥಿವೃಂದಕ್ಕೆ ಸಾರ್ವತ್ರಿಕವಾದ ಮತ್ತು ಸರ್ವಧರ್ಮ ಸಮನ್ವಯ ಧ್ಯೇಯಪೂರಿತವಾದ ಆಧ್ಯಾತ್ಮ ಮತ್ತು ನೈತಿಕ ಶಿಕ್ಷಣ ನೀಡಿ ಪುರಾತನ ಗುರುಕುಲಗಳ ಪ್ರತಿಬಿಂಬವಾಗಬೇಕೆಂಬುದೇ ಶ್ರೀ ನಾರಾಯಣ ಐಯ್ಯಂಗಾರ್ಯರ ಪವಿತ್ರವಾದ ಹಿರಿಯ ಆಸೆ. ಈ ಆಸೆಯು ಇಂದಿನ ಹಿರಿಯ ಶಿಕ್ಷಣ ತಜ್ಞರ ಗಮನಕ್ಕೆ ಬಂದು ಮುಂದಾದರೂ ಆಧ್ಯಾತ್ಮ ಮತ್ತು ನೈತಿಕ ಶಿಕ್ಷಣವು ನಮ್ಮ ಭಾರತೀಯ ರಾಷ್ಟ್ರೀಯ ಶಿಕ್ಷಣ ಕ್ರಮದಲ್ಲಿ ಮೂಲಸ್ಥಾನವನ್ನು ಪಡೆಯುವುದೆಂದು ಆಶಿಸೋಣ.

ತಾವು ಬರೆದ ಲೇಖನಗಳ ಮತ್ತು ಪುಸ್ತಕಗಳ ಪ್ರಕಟನೆಯ ಜೊತೆಗೆ ಶ್ರೀ ನಾರಾಯಣ ಐಯ್ಯಂಗಾರ್ಯರು ಇತರರು ಬರೆದ ಆಧ್ಯಾತ್ಮ ಜ್ಞಾನಪ್ರಚೋದಿತ ಪುಸ್ತಕಗಳ ಪ್ರಕಟನ ಕಾರ್ಯದಲ್ಲಿಯೂ ಆಧ್ಯಾತ್ಮಜ್ಞಾನ ಪ್ರಸಾರಕ್ಕೆ ನೆರವಾದರು. ಮೇಲುಕೋಟೆ ಶ್ರೀ ಯದುಗಿರಿ ಯತಿರಾಜ ಮಠದ ಶ್ರೀ ಸ್ವಾಮಿಗಳವರು ಬರೆದ " ಈಶಾವಾಸ್ಯ ಉಪನಿಷತ್ತು ", " ಕೇನೋಪನಿಷತ್ತು " ಮತ್ತು " ತೈತ್ತಿರಿಯೋಪನಿಷತ್ತು " ಪುಸ್ತಕಗಳನ್ನೂ ಮತ್ತು ದಿವಂಗತ ಶ್ರೀ ಎಸ್ ಪಾರ್ಥಸಾರಥಿ ಐಯ್ಯಂಗಾರ್ಯರು ಇಂಗ್ಲೀಷಿನಲ್ಲಿ ಬರೆದ "The " Bhagavadgitha-Simple Paraphrase in English" ಎಂಬ ಗ್ರಂಥವನ್ನೂ " ಶಾಂತಿ ಸಾಧನೆ " ಮತ್ತು "ಪವಿತ್ರಜೀವನ" ಎಂಬ ಪುಸ್ತಕವನ್ನು ಪ್ರಕಟಿಸಲು ವಿವಿಧ ರೀತಿ ರೀತಿಯಲ್ಲಿ ನೆರವು ನೀಡಿದರು. ಶ್ರೀ ಸ್ವಾಮಿ ವಿವೇಕಾನಂದರ ಕಾಲದಲ್ಲೇ ನಿಂತುಹೋಗಿದ್ದ " ಬ್ರಹ್ಮವಾದಿನ್ " ಎಂಬ ಆಧ್ಯಾತ್ಮ ವಿದ್ಯಾಪ್ರಚಾರ ಇಂಗ್ಲಿಷ್ ಪತ್ರಿಕೆಯನ್ನು ಮತ್ತೆ ಪ್ರಾರಂಭಿಸಲು ತಮ್ಮ ಮಿತ್ರವೃಂದದೊಡನೆ ಸಹಕರಿಸಿದರು.

**ಸಮಾಜಕಲ್ಯಾಣ ಕಾರ್ಯಗಳು**—ಶ್ರೀನಾರಾಯಣ ಐಯ್ಯಂಗಾರ್ಯರಿಗೆ ಸಮಾಜಸೇವೆ ಅತ್ಯಂತಪ್ರಿಯವಾಗಿದ್ದಿತು. ತಮ್ಮ ಕುಟುಂಬ ಮತ್ತು ಬಂಧುವರ್ಗಕ್ಕೆ ನಿಷ್ಕಾಮ ಸೇವೆ ಸಲ್ಲಿಸಿದ್ದಾರೆ. ತನ್ನ ಸ್ವಂತ ಸೌಖ್ಯವನ್ನು ನಿರ್ಲಕ್ಷಿಸಿ ಅವರ ಪ್ರಗತಿಗಾಗಿ ಸರಳವಾದ ತ್ಯಾಗಮಯ ಸಾಂಸಾರಿಕ ಜೀವನವನ್ನು ನಡೆಸಿದರು. ತನ್ನ ಮಾರ್ಗದರ್ಶನವನ್ನು ಬಯಸಿ ಬಂದ ವರ್ಗಕ್ಕೂ, ಮಿತ್ರ ವೃಂದಕ್ಕೂ ಅವರು ಅನೇಕ ರೀತಿಯ ನೆರವು ನೀಡಿದ್ದಾರೆ. ತಮ್ಮ ಮಂಡಲಿಯ ಶ್ರೀ ವೈಷ್ಣವ ಸಮುದಾಯದ ಅಭಿವೃದ್ಧಿಗಾಗಿ ಚಿಕ್ಕಂದಿನಿಂದಲೂ ದುಡಿದಿದ್ದಾರೆ. ಮಂಡಲಿಯ ಶ್ರೀ ವೈಷ್ಣವ ಸಭೆ ಮತ್ತು ಶ್ರೀ ಯದುಗಿರಿ ಯತಿರಾಜ ಮಠ ಮುಂತಾದ ಸಂಘ ಸಂಸ್ಥೆಗಳಿಗೆ ವಿಶೇಷ ಸೇವೆ ಸಲ್ಲಿಸಿದ್ದಾರೆ. ಮಂಡಯಂ ಶ್ರೀ ವೈಷ್ಣವ ಕೋಮಿನ ಸಮೇಳನಗಳನ್ನು ಆಗಿಂದಾಗ್ಗೆ ನಡೆಸಲು ಶ್ರಮಿಸಿದ್ದಾರೆ. ತಮ್ಮ ಶಿಕ್ಷಣ ಕಾರ್ಯಕ್ಷೇತ್ರದ ಮೂಲಕ ವಿಶಾಲ ಸಮಾಜಕ್ಕೂ ತಮ್ಮ ಅಲ್ಪ ಕಾಣಿಕೆಯನ್ನು ಅರ್ಪಿಸಿದ್ದಾರೆ. ಮಾನವನು ತನ್ನ ಕುಟುಂಬ, ತನ್ನ ಬಂಧುವರ್ಗ, ತನ್ನ ಹತ್ತಿರದ ಸಮಾಜ ಮತ್ತು ವಿಶಾಲ ಸಮಾಜ ಮುಂತಾದ ಎಲ್ಲಾ ಕ್ಷೇತ್ರಗಳಿಗೂ ಸತತವಾದ ಸೇವೆ ಸಲ್ಲಿಸಬೇಕೆಂಬುದೇ ಅವರ ಜೀವನದ ಗುರಿಯಾಗಿ ಇದ್ದಿತು. ಈ ರೀತಿಯ ವಿಶಾಲ ಮನೋಧರ್ಮದ ನಿಷ್ಕಾಮ ಸೇವೆ ಆಧ್ಯಾತ್ಮ ಧ್ಯೇಯ ಸಾಧನೆಗೆ ಪ್ರಮುಖ ಮಾರ್ಗವೆಂಬುದನ್ನು ಅವರು ನಂಬಿದ್ದರು.

**ಸರಳಜೀವನ-ಉದಾತ್ತ ಧ್ಯೇಯನಿಷ್ಠೆ :**— ಶ್ರೀ ನಾರಾಯಣ ಐಯ್ಯಂಗಾರ್ಯರ ಜೀವನದಿಂದ ನಾವು ಕಲಿಯಬೇಕಾದ ಪಾಠಗಳು ಅನೇಕವಾಗಿವೆ. ಉಡುಪಿನಲ್ಲಿ ಮತ್ತು ನಿತ್ಯಜೀವನದಲ್ಲಿ ಸರಳತೆ, ಅದಷ್ಟು ತಮ್ಮ ಕೆಲಸ ಕಾರ್ಯಗಳನ್ನು ಇತರರ ಅವಲಂಬನೆ ಇಲ್ಲದೆ ತಾವೇ ಮಾಡಿಕೊಳ್ಳಬೇಕೆಂಬ ಪ್ರಯತ್ನ, ಆಹಾರದಲ್ಲಿ ನಿಯಮಬದ್ಧವಾದ ಸಂಯಮ, ಮಾನಸಿಕ ಸಂತೋಷದಲ್ಲಿ ಆಸಕ್ತಿ, ತನಗಿಂತ ಕಿರಿಯರಲ್ಲಿಯೂ ವಿನೋದಪ್ರಿಯ ಸ್ನೇಹಯುತ ವರ್ತನೆ, ರಾಗದ್ವೇಷಾದಿ ಮನೋವಿಕಾರಗಳ ಮತ್ತು ಕೋಪದ ಮೇಲೆ ಸಂಪೂರ್ಣ ಹತೋಟಿ, ಸತತವಾಗಿ ತಮ್ಮ ತಪ್ಪುಗಳನ್ನು ವಿಮರ್ಶೆಮಾಡಿ ತಿದ್ದುಕೊಳ್ಳುವ ಅಭ್ಯಾಸ, ಇವೆಲ್ಲವೂ ಇವರಲ್ಲಿದ್ದ ಹಿರಿಯ ಗುಣಗಳು. ಹೊರಗಿನ ಪ್ರಪಂಚವನ್ನು ಮನುಷ್ಯ ನಿಷ್ಪಕ್ಷಪಾತವಾಗಿ ನೋಡಿ ಅದರ ಗುಣದೋಷಗಳನ್ನು ವಿವೇಚಿಸುತ್ತಾನೆ. ಆದರೆ ತನ್ನಲ್ಲಿರುವ ಗುಣದೋಷಗಳನ್ನು ವಿವೇಚಿಸುವ ಮನಸ್ಸು ಅನೇಕರಿಗಿರಲಾರದು.

ಜ್ಞಾನಾರ್ಜನೆಯಲ್ಲಿ ಮತ್ತು ಉದಾತ್ತಭಾವನೆಗಳ ಚಿಂತನೆಯಲ್ಲಿ ಇವರ ಆಸಕ್ತಿ ಅನುಕರಣೀಯವಾದುದು.

ವಿದ್ಯಾರ್ಜನೆ ಕೇವಲ ಉದ್ಯೋಗ ಸಂಪಾದನೆಗಾಗಿಲ್ಲ; ಅದು ಮಾನವನ ಉನ್ನತಿಗೆ ಅತಿ ಮುಖ್ಯ ಸಾಧನೆ ಎಂಬುದು ಇವರ ಮತ. ಆದ್ದರಿಂದ ಇವರು ವಿಜ್ಞಾನ ಶಾಸ್ತ್ರ, ಸಮಾಜ ತತ್ವಶಾಸ್ತ್ರ ಮುಂತಾಗಿ ಸಮಸ್ತ ವಿದ್ಯೆಗಳಲ್ಲೂ ಆಸಕ್ತಿ ಹೊಂದಿದ್ದರು ಮತ್ತು ಅವುಗಳನ್ನೆಲ್ಲಾ ಓದಿ ತಿಳಿಯುವುದೂ ಒಂದು ಅಧ್ಯಾತ್ಮ ಅಭ್ಯಾಸ ಎಂಬ ಭಾವನೆ ಹೊಂದಿದ್ದರು. ತಾವು ಓದಿದ ಅನೇಕ ಪುಸ್ತಕಗಳಿಗೆ ಟಿಪ್ಪಣಿಗಳನ್ನು ಬರೆದು ಅವುಗಳಲ್ಲಿರುವ ಮುಖ್ಯ ವಿಷಯಗಳನ್ನು ವಿಮರ್ಶಿಸಿ ತಮ್ಮ ಜ್ಞಾಪಕಾರ್ಥಕ್ಕಾಗಿ ಗುರುತು ಮಾಡಿಟ್ಟುಕೊಳ್ಳುತ್ತಿದ್ದರು. ಈ ರೀತಿ ಬರೆದಿಟ್ಟ ಅನೇಕ ಪುಸ್ತಕಗಳನ್ನು ಅವರು ಬಿಟ್ಟು ಹೋಗಿದ್ದಾರೆ.

ತತ್ವಶಾಸ್ತ್ರ ಇವರ ಪಾಲಿಗೆ ಕೇವಲ ಬೌದ್ಧಿಕ ಜಿಜ್ಞಾಸೆಯನ್ನು ತಣಿಸುವ ಸಾಧನವಾಗಿರಲಿಲ್ಲ. ತಮ್ಮ ಬದುಕನ್ನೇ ರೂಪಿಸುವ ಪ್ರಯೋಗ ಕ್ಷೇತ್ರವಾಗಿತ್ತು. ಸರ್ವಮತ ಸಂದೇಶಗಳನ್ನು ಆದಷ್ಟು ಮನನ ಮಾಡುತ್ತಿದ್ದುದರಿಂದ ತಾವು ಬುದ್ಧಿಪೂರ್ವಕವಾಗಿ ಓದಿ ತರ್ಕಿಸಿ ನಂಬಿದ ಮತೀಯ ಅಭ್ಯಾಸಗಳನ್ನು ತಮ್ಮ ಸ್ವಂತ ರೀತಿಯಲ್ಲಿ ಶ್ರದ್ಧೆಯಿಂದ ಆಚರಿಸುತ್ತಿದ್ದರು. ಕಾಲದ ಮಹಿಮೆಯನ್ನು ಅವರು ಬಹಳ ಮಟ್ಟಿಗೆ ಅರಿತಿದ್ದರು. ಜೀವನದ ಪ್ರತಿದಿನವನ್ನೂ ತಮ್ಮ ಸಾತ್ವಿಕ ದಿನಚರಿಯ ವೇಳಾಪಟ್ಟಿಯ (Daily spiritual Time Table) ಮೂಲಕ ಸರಿಯಾಗಿ ವಿಭಾಗಿಸಿ ತಮ್ಮ ಜಾಗೃತಿಕ ಜೀವನವನ್ನು ಯಾವ ರೀತಿಯಲ್ಲೂ ನಷ್ಟಮಾಡಿಕೊಳ್ಳದೆ ಪೂರ್ಣ ಲಾಭ ಪಡೆಯುವ ರೀತಿಯಲ್ಲಿ ವಿನಿಯೋಗಿಸಲು ಪ್ರಯತ್ನಿಸುತ್ತಿದ್ದರು. ಅವರ ದೈನಂದಿನ ಜೀವನದಲ್ಲಿ ಧ್ಯಾನ, ಜಪ, ಸಂಕಲ್ಪ, ಮನನ, ಭಕ್ತಿ ಗೀತಗಾನ, ಕರ್ಮಯೋಗಾಭ್ಯಾಸ, ಜ್ಞಾನಯೋಗಾಭ್ಯಾಸ, ಭಕ್ತಿ ಮತ್ತು ಪ್ರಪತ್ತಿಮಾರ್ಗಾನುಸಂಧಾನ ಎಲ್ಲಕ್ಕೂ ಒಂದು ಸ್ಥಾನವಿದ್ದಿತು. ಪ್ರತಿದಿನವೂ ತಮ್ಮ ವೇಳಾಪಟ್ಟಿಯಲ್ಲಿ ಸೂಚಿಸಿರುವ ನಿಯಮದಂತೆ ಜೀವನವನ್ನು ನಡೆಸುತ್ತಿದ್ದರು.

### ಕೊನೆಯ ದಿನ

ಶ್ರೀ ನಾರಾಯಣ ಐಯ್ಯಂಗಾರ್ಯರು ಇಹಲೋಕನ್ನು ತ್ಯಜಿಸಿದ ರೀತಿ ಆಶ್ಚರ್ಯಕರವಾಗಿದೆ. ಅವರ ಕೊನೆಯ ದಿನಗಳಲ್ಲಿ ಅವರಿಗೆ ಒಂದು ರೀತಿಯ ಅಸಮಾಧಾನ ಮತ್ತು ಚಿಂತೆ ತಲೆದೋರಿತು. ತಾನು ಇಷ್ಟು ನಿಷ್ಠೆಯಿಂದ ಅಧ್ಯಾತ್ಮ ಜೀವನದ ಅನುಷ್ಠಾನಕ್ಕೆ ಸತತ ಪ್ರಯತ್ನ ನಡೆಸಿದರೂ ತನಗೆ ಆತ್ಮಸಾಕ್ಷಾತ್ಕಾರ ಮತ್ತು ಬ್ರಹ್ಮಸಾಕ್ಷಾತ್ಕಾರ ಆಗಲಿಲ್ಲವಲ್ಲಾ ಎಂಬುವುದೇ ಅವರ ಕೊರಗಿಗೆ ಕಾರಣ. ಇದರಿಂದಾಗಿ ಅವರು ಪೂರ್ಣ ಪ್ರಪತ್ತಿ ಮಾರ್ಗದ ನ್ಯಾಸ ವಿದ್ಯೆಯ ಆದರ್ಶವನ್ನು ಅಂಗೀಕರಿಸಿದರು. ತಮ್ಮ ಜೀವನದ ಅನುಭವಸಾರವೆಲ್ಲವನ್ನೂ "The Path to attain Shanti in advanced age" ಎಂಬ ಇಂಗ್ಲೀಷು ಪುಸ್ತಕ ಒಂದರಲ್ಲಿ ಬರೆಯಲು ಪ್ರಾರಂಭಿಸಿದರು. 1969 ನೇ ಫೆಬ್ರವರಿ 12 ನೇ ತಾರೀಖಿನಂದು ಈ ಪುಸ್ತಕವನ್ನು ಪೂರ್ತಿಯಾಗಿಬರೆದು ಕೊನೆಯಲ್ಲಿ "I and mine hereafter do not belong to me, belong to You eternally." ಎಂದು ಬರೆದು ಮುಗಿಸಿದರು. ಅಂದು ಎಂದಿನಂತೆ ಧ್ಯಾನ ಸ್ತೋತ್ರಾದಿಗಳನ್ನು ನಡೆಸಿದರು. ರಾತ್ರಿ ಎಲ್ಲರೊಡನೆ ಮಾತನಾಡಿ ಮಾರನೇ ದಿನದ ಸಾತ್ವಿಕ ದಿನಚರಿಯ ವೇಳಾಪಟ್ಟಿಯನ್ನೂ ಬರೆದು ತಮ್ಮ ಜೇಬಿನಲ್ಲಿಟ್ಟುಕೊಂಡು ಮಲಗಿದರು. ಮಾರನೇ ದಿನ ಪ್ರಾತಃಕಾಲ ಧ್ಯಾನಕ್ಕಾಗಿ ತಾವು ನಿಗದಿಪಡಿಸಿದ್ದ ವೇಳೆಯಲ್ಲಿ, ತನ್ನಲ್ಲಿ ಆರ್ತತೆಯಿಂದ ಪ್ರಪತ್ತಿ ಮಾಡಿದ ಭಕ್ತನನ್ನು ಭಗವಂತನೇ ತನ್ನ ಬಳಿ ಕರೆದುಕೊಂಡನೋ ಎಂಬಂತೆ, ತಾವು ಮಲಗಿದ್ದಂತೆಯೇ ಯಾರಿಗೂ ತಿಳಿಸದೆ ಬಹುಶಃ ತಮಗೇ ತಿಳಿಯದೆ, ಶಾಂತ ರೀತಿಯಲ್ಲಿ ಇಹಲೋಕ ಯಾತ್ರೆಯನ್ನು ಪೂರೈಸಿ ಭಗವಂತನ ಪಾದಾರವಿಂದವನ್ನು ಬೆಳಗಿನ ಬ್ರಹ್ಮ ಮುಹೂರ್ತದ ವೇಳೆಯಲ್ಲಿ ಸೇರಿದರು. ಸಂಶಯದಿಂದ ಬೆಳಗ್ಗೆ ಅವರನ್ನು ಎಬ್ಬಿಸಲು ಪ್ರಯತ್ನಿಸಿದ ಅವರ ಹತ್ತಿರದ ಬಂಧುಗಳಿಗೆ ಅವರ ಮರಣದ ಅರಿವು ಉಂಟಾಯಿತು. ಅವರ 18ನೇ ವಯಸ್ಸಿನಲ್ಲಿ ಹೃದಯದ ನಿಲ್ಲುವಿಕೆಯಿಂದ ಉಂಟಾದ ಈ ಅನಿರೀಕ್ಷಿತ ಮರಣ ನಮ್ಮೆಲ್ಲರಿಗೂ ಒಂದು ಆಶ್ಚರ್ಯಕರ ಸಮಸ್ಯೆಯಾಗಿಯೇ ಉಳಿದಿದೆ.

ಇವರ ಧರ್ಮಪತ್ನಿ ಶ್ರೀಮತಿ ಸಿಂಗಮ್ಮನವರು ತಮ್ಮ ಪತಿಯ ಹಿನ್ನೆಲೆಯಲ್ಲಿ ಅವರ ಧ್ಯೇಯಾನುವರ್ತಿನಿಯಾಗಿ 71 ವರ್ಷಗಳ ವರ್ಷಗಳ ಕಾಲ ಬದುಕಿ ಬಾಳಿದರು. ಅವರು ಸಂಸ್ಕೃತ ಮತ್ತು ತಮಿಳುಭಾಷೆಗಳಲ್ಲಿ ಧರ್ಮಗ್ರಂಥಗಳನ್ನು ಅವರ ತಾಯಿ ಶ್ರೀ ವೇದಮ್ಮನವರ ಮೂಲಕ ಅಧ್ಯಯನ ಮಾಡಿದ್ದರು. ತಮ್ಮ ಪತಿಯ ದೈನಂದಿನ ಸಾತ್ವಿಕ ದಿನಚರಿಯ ಧ್ಯಾನ ಮತ್ತು ಸ್ತೋತ್ರಾದಿ ಕಾರ್ಯಕ್ರಮಗಳಲ್ಲಿ ತಾವೂ ಭಾಗಿಗಳಾಗಿ ತಮ್ಮ ದೈವಭಕ್ತಿಯನ್ನು ಬೆಳಸಿಕೊಂಡಿದ್ದರು. ಎಲ್ಲಾ ಬಂಧು ವರ್ಗದವರಲ್ಲಿ ಪರಮಪ್ರೀತಿ ಆದರಗಳನ್ನು ತೋರಿಸಿ ಎಲ್ಲರ ಗೌರವವನ್ನೂ ವಿಶ್ವಾಸವನ್ನೂ ಗಳಿಸಿಕೊಂಡಿದ್ದರು ತಮ್ಮ ಪತಿಯ ಅನಿರೀಕ್ಷಿತ ಮರಣದಿಂದ ಜೀವನದಲ್ಲಿ ಅತ್ಯಂತ ಜಿಗುಪ್ಸೆಹೊಂದಿ 1969 ನೇ ಜುಲೈ 23 ನೇ ತಾರೀಖಿನಂದ ದೇವರ ಪಾದಾರವಿಂದವನ್ನು ಸೇರಿದರು.

ದಿವಂಗತ ಆದರ್ಶ ದಂಪತಿಗಳ ಆತ್ಮಕ್ಕೆ ಪರಮ ಶಾಂತಿ ಲಭಿಸಲಿ. ಅವರ ಜೀವನಾದರ್ಶಗಳು ನಮ್ಮ ಬಾಳನ್ನೂ ಬೆಳಗಲಿ.